# ಕರ್ನಾಟಕ ವಿಧಾನ ಪರಿಷತ್

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 75 (147) |
| ಮಾನ್ಯ ಸದಸ್ಯರ ಹೆಸರು | ಶ್ರೀ ಅ. ದೇವೇಗೌಡ (ಪದವೀಧರರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 01/02/2021 |
| ಉತ್ತರಿಸಬೇಕಾದ ಸಚಿವರು | ಮಾನ್ಯ ಆರೋಗ್ಯ & ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಆರು (6) ಕೋಟಿಗೂ ಮೀಗಿಲಾದ ಜನಸಂಖ್ಯೆಯುಳ್ಳ ರಾಜ್ಯದಲ್ಲಿ ಹೃದ್ರೋಗದಿಂದ ನರಳುತ್ತಿರುವ ರೋಗಿಗಳು ಚಿಕಿತ್ಸೆಗಾಗಿ ಪರದಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಗೆ ಬರುವ ಹೃದ್ರೋಗದಿಂದ ಬಳಲುತ್ತಿರುವ ಎಲ್ಲಾ ರೋಗಿಗಳಿಗೂ ಉತ್ತಮವಾದ ಮತ್ತು ಗುಣಮಟ್ಟವುಳ್ಳ ಚಿಕಿತ್ಸೆಯನ್ನು ನೀಡಲಾಗುತ್ತಿದೆ. |
| (ಆ) | ಹೃದ್ರೋಗ ಕಾಯಿಲೆಗಳಿಗೆ ಉತ್ತಮ ಚಿಕಿತ್ಸೆ ನೀಡಲು ಶ್ರಮಿಸುತ್ತಿರುವ ಬೆಂಗಳೂರಿನ ಜಯದೇವ ಆಸ್ಪತ್ರೆಯ ಶಾಖೆಗಳನ್ನು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಒಂದೊಂದರಂತೆ ಮತ್ತು ಬೆಂಗಳೂರಿನ ವಿವಿಧ ಕಡೆ ತೆರೆಯುವ ಅವಶ್ಯಕತೆ ಬಗ್ಗೆ ಸರ್ಕಾರ ಪರಿಶೀಲಿಸಿ ಕ್ರಮ ಕೈಗೊಳ್ಳುವುದೆ? | ಪ್ರಸ್ತುತ ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯು ಮೈಸೂರು ನಗರ ಹಾಗೂ ಮೈಸೂರಿನ ಸುತ್ತಮುತ್ತಲಿನ ಜಿಲ್ಲೆಗಳಾದ ಮಂಡ್ಯ ಕೆ.ಆರ್.ನಗರ, ಕೊಡಗು, ಹಾಸನ, ಚಾಮರಾಜನಗರ, ಇತ್ಯಾದಿ ಜಿಲ್ಲೆಗಳ ರೋಗಿಗಳ ಹಿತದೃಷ್ಟಿಯಿಂದ 350 ಹಾಸಿಗೆ ಸಾಮರ್ಥ್ಯದ ಸಂಸ್ಥೆಯ ಶಾಖೆಯನ್ನು ಈಗಾಗಲೇ ಪ್ರಾರಂಭಿಸಿ ಕಾರ್ಯನಿರ್ವಹಿಸಲಾಗುತ್ತಿದೆ.<br><br>ಮುಂದುವರೆದು, ಹೈದ್ರಾಬಾದ್ ಕರ್ನಾಟಕ ಪ್ರದೇಶಗಳಾದ ಕಲಬುರಗಿ ಸೇರಿ ಬಳ್ಳಾರಿ, ಬೀದರ್, ರಾಯಚೂರು, ಕೊಪ್ಪಳ ಹಾಗೂ ಯಾದಗಿರಿ ಜಿಲ್ಲೆಗಳು ಇತರೆ ನೆರೆಹೊರೆಯ ಜಿಲ್ಲೆಗಳ ರೋಗಿಗಳಿಗೆ ಸಕಾಲದಲ್ಲಿ ಉತ್ತಮ ಗುಣಮಟ್ಟದ ಹೃದ್ರೋಗ ಚಿಕಿತ್ಸೆಯನ್ನು ನೀಡುವ ನಿಟ್ಟಿನಲ್ಲಿ ಕಲಬುರಗಿ ವೈದ್ಯಕೀಯ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ಆವರಣದಲ್ಲಿ 120 ಹಾಸಿಗೆ ಸಾಮರ್ಥ್ಯವುಳ್ಳ ಸಂಸ್ಥೆಯ ಶಾಖೆಯನ್ನು ಪ್ರಾರಂಭಿಸಲಾಗಿದೆ.<br><br>ಹಾಗೂ ಕಲ್ಯಾಣ ಕರ್ನಾಟಕ ಯೋಜನೆಯಡಿ ಕಲಬುರಗಿಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳ ಕಛೇರಿಯ ಆವರಣದಲ್ಲಿ 300 ಹಾಸಿಗೆ ಸಾಮರ್ಥ್ಯವುಳ್ಳ ಆಸ್ಪತ್ರೆಯ ನೂತನ ಕಟ್ಟಡದ ಕಾಮಗಾರಿಯು ಪ್ರಾರಂಭಿಕ ಹಂತದಲ್ಲಿದೆ.<br><br>ಕಾರ್ಮಿಕರ ಹಿತದೃಷ್ಟಿಯಿಂದ ಉತ್ತಮ ಗುಣಮಟ್ಟದ ಹೃದ್ರೋಗ ಚಿಕಿತ್ಸೆಯನ್ನು ನೀಡಲು ಬೆಂಗಳೂರಿನ ರಾಜಾಜಿನಗರ – ಇಎಸ್‌ಸಿ-ಎಂಹೆಚ್ ಇಲ್ಲಿ ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ಶಾಖೆಯು ಕಾರ್ಯನಿರ್ವಹಿಸುತ್ತಿದೆ. ಅಲ್ಲದೆ, ಸಂಸ್ಥೆಯ ಬೆಂಗಳೂರು ಶಾಖೆಯ ಆವರಣದಲ್ಲಿ ಇನ್ಫೋಸಿಸ್ ಫೌಂಡೇಷನ್ ಸಹಕಾರದೊಂದಿಗೆ 350 ಹಾಸಿಗೆ ಸಾಮರ್ಥ್ಯವುಳ್ಳ ಆಸ್ಪತ್ರೆಯ ನಿರ್ಮಾಣವನ್ನು ಕೈಗೊಂಡಿದ್ದು, ಸದರಿ ಆಸ್ಪತ್ರೆ ನಿರ್ಮಾಣವು ಜೂನ್/ಜುಲೈ-2021ರೊಳಗೆ ಪೂರ್ಣಗೊಳ್ಳಲಿದೆ.<br><br>ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಮತ್ತು ಬೆಂಗಳೂರಿನ ವಿವಿಧ ಕಡೆ ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ಘಟಕಗಳನ್ನು ಸ್ಥಾಪಿಸುವ ಯಾವುದೇ ಪ್ರಸ್ತಾವನೆಯು ಇರುವುದಿಲ್ಲ. |

**ಕಡತ ಸಂ: ಎಂಇಡಿ 37 ಎಂ ಎಸ್ ಎಫ್ 2021**

(ಡಾ: ಕೆ. ಸುಧಾಕರ್)
**ಆರೋಗ್ಯ & ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು.**